ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ರೈತರ ಜಮೀನಿನ ಖಾತೆ ಮಾಡುವ ಜೆ - ನಮೂನೆ ಬಗ್ಗೆ

ಶ್ರೀ ಕಾಂತರಾಜು (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

257 (370) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಜಮೀನಿನ ಕ್ರಯ, ಮ್ಯುಟೇಷನ್, ಖಾತೆ ಬದಲಾವಣೆ ಪ್ರಕ್ರಿಯೆಯಲ್ಲಿ ಬರುವ J-Slip (ಜೆ-ನಮೂನೆ) ಎಂದರೇನು;ಇದಕ್ಕೆ ಕಾನೂನಿನಡಿಯಿರುವ ಮಹತ್ವವೇನು ; (ವಿವರವಾದ ಮಾಹಿತಿ ನೀಡುವುದು)

(ಆ) J-Slip (ಜೆ-ನಮೂನೆ) Un-processed Through Mutations ಸಂಬಂಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಇ) ರಾಜ್ಯದಲ್ಲಿ ಸಾವಿರಾರು ರೈತರು ಈ ಹಿಂದೆ ಜಮೀನುಗಳನ್ನು ಕ್ರಯ ಮಾಡಿಸಿಕೊಂಡು ಖಾತೆ ಮಾಡಿಸಿಕೊಳ್ಳದೆ ಸದರಿ ಜಮೀನನ್ನು ಉಳುಮೆ ಮಾಡಿಕೊಂಡು ಬರುತ್ತಿದ್ದು, ಇವರಿಗೆ ಸದರಿ ಜಮೀನಿನ ಮಾಲೀಕತ್ವದ ಹಕ್ಕು ಇದೆಯೇ ಹಾಗೂ ಇದರ ಸಂಬಂಧ ತೆಗೆದುಕೊಂಡ ಕ್ರಮಗಳೇನು ; ಸರ್ಕಾರ ಇಂತಹ ಪ್ರಕರಣಗಳಿಗೆ ಯಾವ ರೀತಿ ನ್ಯಾಯ ಒದಗಿಸುವುದು;

(ಈ) ದಿನಾಂಕ: 31.05.2006ಕ್ಕಿಂತ ಹಿಂದೆ ನೋಂದಣಿಯಾದ ಜೆ-ನಮೂನೆಗಳನ್ನು ಭೂಮಿ ತಂತ್ರಾಂಶದಲ್ಲಿ ಅಳವಡಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ ? (ವಿವರವಾದ ಮಾಹಿತಿ ಕೊಡುವುದು)